# ಪು.ತಿ.ನ.
# ಮಲೆದೇಗುಲ

ಚಿತ್ರಗಳು
**ಎ.ಎನ್. ಮುಕುಂದ್ ಮತ್ತು
ಪ್ರತೀಕ್ ಮುಕುಂದ್**

ಪರಿಕಲ್ಪನೆ
**ಡಾ॥ ಎಚ್.ಎಸ್. ವೆಂಕಟೇಶ ಮೂರ್ತಿ**

**ಡಾ॥ ಪು.ತಿ.ನ. ಟ್ರಸ್ಟ್ (ರಿ.)**
**# 30, ಸಂಕಲ್ಪ ಪುಷ್ಪಗಿರಿ ನಗರ, ಬನಶಂಕರಿ 3ನೇ ಘಟ್ಟ
ಬೆಂಗಳೂರು – 560 085**

# Pu.Ti.Na. MALEDEGULA

*A collection of poems with photographs*

Photos : **A.N. Mukund & Prateek Mukund**

Concept : **Dr. H.S. Venkatesha Murthy**

Published by

**Dr. Pu.Ti.Na. Trust (R.)**

# 30, Sankalpa, Pushpagirinagar
Banashankari 3rd Stage
Bengaluru - 560 085
Cell: 97391 55175, 94481 81133
E-mail: putinatrust@gmail.com

First Edition : 2016

Pages : viii + 104

Price : 200/-



Paper Used : 130 gsm Art Paper

DTP : Shreedhar

Layout : Manjunath S

**ಡಾ॥ ಪು.ತಿ.ನ. ಟ್ರಸ್ಟ್ (ರಿ.)**

# **30, ಸಂಕಲ್ಪ, ಪುಷ್ಪಗಿರಿ ನಗರ,**
**ಬನಶಂಕರಿ 3ನೇ ಘಟ್ಟ**
**ಬೆಂಗಳೂರು – 560 085**

ಸ್ವಾನ್ ಪ್ರಿಂಟರ್ಸ್
svanprint@gmail.com
080 2674 2233



# ಡಾ. ಪು.ತಿ. ನರಸಿಂಹಾಚಾರ್

(17 ಮಾರ್ಚ್ 1905 – 13 ಅಕ್ಟೋಬರ್ 1998)

## ಮಲೆದೇಗುಲದ ಮುಂದೆ...

ಅರವತ್ತು ವರ್ಷಗಳ ಹಿಂದೆ ಪುತಿನ, ಮಲೆದೇಗುಲ ರಚಿಸಿದಾಗ ಆವತ್ತಿನ ಓದುಗವರ್ಗಕ್ಕಿದ್ದ ರುಚಿ, ಸಂಸ್ಕೃತಭಾಷಾ ವೈದುಷ್ಯ, ಪ್ರಾಚೀನಕಾವ್ಯಪರಂಪರೆಯ ಪ್ರವೇಶ, ಈವತ್ತಿನ ಓದುಗವರ್ಗಕ್ಕೂ ಇರಬೇಕೆಂದು ನಾವು ಬಯಸಬಹುದು; ಆದರೆ ನಿರೀಕ್ಷಿಸುವುದು ತಪ್ಪಾಗುತ್ತದೆ. ಪುತಿನ ನಂತರದ ತಲೆಮಾರಿಗೆ ಸೇರಿದ ನಾನೂ ಕೂಡ ಶ್ರೀಹರಿಚರಿತೆ, ಮಲೆದೇಗುಲದಂಥ ಪುತಿನ ಅವರ ಕ್ಲಾಸಿಕ್ ಕೃತಿಗಳನ್ನು ಅಭ್ಯಾಸಮಾಡುವಾಗ ಮತ್ತೆ ಮತ್ತೆ ಸಂಸ್ಕೃತ ಮತ್ತು ಹಳಗನ್ನಡ ವಿದ್ವಾಂಸರ ಆಸರೆಗೆ ನುಗ್ಗುವುದು ಅನಿವಾರ್ಯವಾಗುತ್ತಿದೆ. ಪುತಿನ ಅವರ ಭಾಷೆಯ ಪೆಡಸುತನ ಮತ್ತು ಶೈಲಿಯ ಬಿಕ್ಕಟ್ಟು ಅದಕ್ಕೆ ಕಾರಣ. ಪಕ್ಕ ದೇಸಿಯಲ್ಲಿ ಬರೆಯುವಾಗ ಕೂಡ ಪುತಿನ ರಚಿಸುವ ಸಮಾಸಪದಗಳು ನಮಗೆ ಅನೇಕಬಾರಿ ಕಗ್ಗಂಟಾಗುತ್ತವೆ. ಬಹು ಸುಂದರವಾದ ಪುತಿನ ಅವರ ಒಂದು ಪದ್ಯವನ್ನು ಉದಾಹರಣೆಗೆ ತೆಗೆದುಕೊಳ್ಳೋಣ.

ಮನೆಯಲ್ಲ ಮಠವಲ್ಲ ರಾಜನರಮನೆಯಲ್ಲ<br>
ಇದು ನಾಟ್ಯಮಂದಿರ ಛಾತ್ರ ಸತ್ರವಲ್ಲ<br>
ಜೀವ ಬಯಸುವ ಭೋಗದುಪಕರಣವಲ್ಲವಿದು<br>
ಆವರ್ಥ ಘಟಿಸಿತೀ ತೆರ ಮಲೆಯ ಕಲ್ಲ?<br>
ಗೋಪುರದ ತುದಿಯಲ್ಲಿ ಬಾನನೆತ್ತುತ ನಿಂತು<br>
ಇರುಳಿನೊಳು ಮಿರುತಾರಗೆಯ ಮಾಲೆಗೊಳುತ<br>
ಮೋಡ ಮುತ್ತುವ ಜಡೆಗೆ ಜಾಹ್ನವಿಯೆ ಜಾರಿ ಬರೆ<br>
ಪಕ್ಕಕೆಳೆವೆರೆಸೆಕ್ಕಿ ಕಣ್ ಸವಿಯಗೊಳುತ<br>
ಮೆರೆವಿದರ ದರ್ಶನವೆ ದುಡುಕಿಸುವುದೆನ್ನೆದೆಯ ನಡೆಯ<br>
ಮನುಜಗಿದೆ ನೆಲೆಯಾಸೆಯೋ ಕಟ್ಟಕಡೆಯ? (ಮಲೆದೇಗುಲ)



ಕವಿ, ಮಲೆದೇಗುಲವನ್ನು ತಮ್ಮ ಪೂರ್ಣಾವಗಾಹನೆಗೆ ಬರುವಂಥ ಅಂತರದಲ್ಲಿ ನಿಂತು ದಿವ್ಯವೂ, ಬೃಹತ್ತೂ ಆದ ಆ ಮಹಾ ನಿರ್ಮಾಣವನ್ನು ನೋಡುತ್ತಾ ಇದ್ದಾರೆ. ಅದು  ಇರುಳ ಸಮಯ. ಗೋಪುರದ ತುದಿಯಲ್ಲಿ ಬಾಲಚಂದ್ರ ಕಾಣಿಸುತ್ತಿದ್ದಾನೆ. ಉನ್ನತವಾದ ಗೋಪುರ ಆಕಾಶವನ್ನೇ ಮೇಲಕ್ಕೆತ್ತಿ ಹಿಡಿದಿರುವಂತೆ ಕಾಣುತ್ತಾ ಇದೆ. ಗೋಪುರಕ್ಕೆ ನಕ್ಷತ್ರಗಳ ಮಾಲೆಯನ್ನೇ ತೊಡಿಸಿದ ಹಾಗಿದೆ. ಆಗ ಒಂದು ಮೋಡ ಗೋಪುರದ ನೆತ್ತಿಯ ಮೇಲಿ ಇಳಿಯುತ್ತಾ ಇದ್ದರೆ, ಗಂಗೆಯೇ ಗೋಪುರದ ಜಡೆಗೆ ಜಾರುತ್ತಿರುವಂತಿದೆ. ಚಂದ್ರನನ್ನು ಮುಡಿಯ ಪಕ್ಕಕ್ಕೆ ಸೆಕ್ಕಿಸಿಕೊಂಡು, ಗಂಗೆಯನ್ನು ಮುಡಿಯಲ್ಲಿ ಧರಿಸಿ, ನಕ್ಷತ್ರಗಳ ಮಣಿಹಾರದಿಂದ ಅಲಂಕೃತಗೊಂಡು, ಆಕಾಶಚುಂಬಿಯಾಗಿ ಕಣ್ಣೆದುರು ನಿಂತ ಗುಡಿಯ ಮಹಾಗೋಪುರವು ಕವಿಗೆ ಗಂಗಾಧರನೂ, ಚಂದ್ರಚೂಡನೂ, ಮಣಿಮಾಲಾವಿಭೂಷಿತನೂ ಆದ ಶಿವನ ರೂಪವನ್ನೇ ಕಣ್ಮುಂದೆ ನಿಲ್ಲಿಸುತ್ತದೆ. ಅದೊಂದು ಭೂಮಾನುಭೂತಿಯ ದಿವ್ಯ ದರ್ಶನ. ಆ ದರ್ಶನ ಆದಾಗ ಕವಿಗೆ ಅನ್ನಿಸುತ್ತದೆ: "ಮನುಷ್ಯನಿಗೆ ಈ ಗುಡಿಯೇ ಕಟ್ಟಕಡೆಯ ಆಶ್ರಯಸ್ಥಾನವಿರಬಹುದೇ?". ಇಷ್ಟು ಸೊಗಸಾದ ಪ್ರತಿಮಾ ನಿರ್ಮಾಣವು ಓದುಗರಿಗೆ ಸಂವಹನವಾಗಬೇಕಾದರೆ ಕವಿಯ ಕಾವ್ಯಭಾಷೆಯು ಮೊದಲು ನಮ್ಮ ಓದಿನಲ್ಲಿ ಬಿಚ್ಚಿಕೊಳ್ಳುವಂತಿರಬೇಕು. ಪಕ್ಕಕೆಳೆವೆರೆಸೆಕ್ಕಿ-ಪಕ್ಕಕೆ-ಎಳೆವೆರೆ-ಸೆಕ್ಕಿ- ಎಂಬ ಸಮಾಸಪದವೇ ನಮ್ಮನ್ನು ಕಕ್ಕಾವಿಕ್ಕಿಯಾಗಿಸಿಬಿಡುತ್ತದೆ.  ಎಳೆಯ-ಪೆರೆ-ಬಾಲಚಂದ್ರ  ಎಂಬುದು ಹೊಳೆಯದೆ ಹೋದರೆ , ತೆರೆದುಕೊಳ್ಳಬೇಕಾದ ಬಾಗಿಲು ಮುಚ್ಚಿಕೊಳ್ಳೋದಕ್ಕೆ ಬಳಕೆಯಾದಂತಾಗಿ, ಕಾವ್ಯದ ಚೆಲುವು ದುರೂಹ್ಯವಾಗಿಬಿಡುತ್ತದೆ.
ಇನ್ನೊಂದು ಪದ್ಯ ನೋಡಿ:

ಗುಡಿಯಿದಿರ ಮಣಿಗೆಯೇ, ಭೂಮಾ ವಿನಮ್ರತೆಯೆ
ದುರ್ಭರಾಹಂಕಾರ ದಮನ ವಿಧಿಯೇ
ಆನಂದ ವರಣದೊಳು ಸುಖಯಜ್ಞ ಕಲ್ಪವೇ
ತರ್ಕಧೀಧರಗರಳಶಮನ ಸುಧೆಯೇ

ಸಂಸ್ಕೃತ ಶಬ್ದಗಳ ಈ ಜಬ್ರು ಹೊಸಕಾಲದ ಓದುಗರನ್ನು ಅಧೀರಗೊಳಿಸುವಂತಿದೆ. ಹಾಗಂತ, ನಾವು ಪುತಿನ ಅಂಥ ಕವಿಯಿಂದ ದೂರ

ಉಳಿದರೆ ನಷ್ಟ ನಮಗೇ ಹೊರತು ಕವಿಗಲ್ಲ. ಅದಕ್ಕಾಗಿ ಅವರ ಬಿಗಿಯಾದ ಬಂಧ, ಅಪರಿಚಿತ ಭಾಷಾವ್ಯೂಹಗಳನ್ನು ಹಗುರಾಗಿ ಬಿಡಿಸಿಕೊಟ್ಟು, ಅಂತರ್ಗತವಾಗಿರುವ ಕಾವ್ಯದ ಚೆಲುವನ್ನು, ಪ್ರತೀಕದ ಮಹಿಮೆಯನ್ನು, ವಿಚಾರದ ನಾವಿನ್ಯವನ್ನು, ಭಾವದ ಸೂಕ್ಷ್ಮತೆಯನ್ನು, ದರ್ಶನದ ಘನತೆಯನ್ನೂ ಆಸಕ್ತ ಓದುಗರಿಗೆ ವಿವರಿಸುವ ಟೀಕುಗಳು ಈಗಿನ ತುರ್ತು ಅಗತ್ಯಗಳಾಗಿವೆ. ಟ್ರಸ್ಟ್ ಈಗ ಆ ಕೆಲಸವನ್ನು ಕೈಗೆತ್ತಿಕೊಂಡಿದೆ. ಜೊತೆಗೆ ಪುತಿನ ಅವರ ಮಲೆದೇಗುಲದಂಥ ಕಾವ್ಯ ಮೇಲುಕೋಟೆಯ ದೇವಾಲಯಕೇಂದ್ರಿತ ಪರಿಸರದೊಂದಿಗೆ ಸಂಪೂರ್ಣವಾಗಿ ಬೆಸೆದುಕೊಂಡು ಬಿಟ್ಟಿರುವುದರಿಂದ ಯದುಗಿರಿಯ ಚಿತ್ರಾವಳಿಯು ರಸಿಕರ ಕಾವ್ಯಗ್ರಹಿಕೆಗೆ ಪೋಷಕವಾಗುವಂಥ ಭೂಮಿಕೆಯನ್ನು ಒದಗಿಸೀತೆನ್ನುವ ಆಸೆಯೂ ನಮಗಿದೆ. ಪೂಜಾವಿಗ್ರಹವನ್ನು ಪೀಠದಲ್ಲಿಟ್ಟು ಮೆರೆಸಿದ ಹಾಗೆ ಇದು. ಪ್ರಸ್ತುತ ಮುದ್ರಣದ ಹಿಂದೆ ಆ ಬಗೆಯ ಆಸೆ, ನಿರೀಕ್ಷೆ ಮತ್ತು ತಹತಹಗಳಿವೆ. ಈ ಪ್ರಕಟಣೆ ಕಾವ್ಯಾಸಕ್ತರಿಗೆ ಪ್ರಿಯವಾದೀತೆಂಬುದು ಪ್ರತಿಷ್ಠಾನದ ವಿನಮ್ರ ಅಪೇಕ್ಷೆ.

ನಮ್ಮ ಕೋರಿಕೆಯನ್ನು ಮನ್ನಿಸಿ ಮೇಲುಕೋಟೆಯ ದೇಗುಲ ಪರಿಸರವನ್ನು ತಮ್ಮ ಅಪೂರ್ವ ಚಿತ್ರಿಕೆಗಳ ಮೂಲಕ ಸೆರೆಹಿಡಿದು ಕೊಟ್ಟಿರುವ ಖ್ಯಾತ ಛಾಯಾಗ್ರಾಹಕರಾದ ಎ.ಎನ್.ಮುಕುಂದ ಮತ್ತು ಅವರ ಚಿರಂಜೀವಿ ಪ್ರತೀಕ್ ಗೆ ಪುತಿನ ಪ್ರತಿಷ್ಠಾನವು ಆಭಾರಿಯಾಗಿದೆ. ತಪ್ಪಿಲ್ಲದಂತೆ ಕೃತಿಯ ಅಚ್ಚಿನ ಪ್ರತಿ ಸಿದ್ಧಪಡಿಸಿದ ಶ್ರೀಧರ್ ಅವರಿಗೆ ನಮ್ಮ ವಂದನೆಗಳು. ದೋಷಮುಕ್ತವಾದ ಮುದ್ರಣ ಸಿದ್ಧಪಡಿಸುವಲ್ಲಿ ನನ್ನೊಂದಿಗೆ ಟ್ರಸ್ಟಿನ ಹಿರಿಯ ಸದಸ್ಯರಾದ ಡಾ.ಶ್ರೀರಾಮಭಟ್ಟರು ಶ್ರಮಿಸಿದ್ದಾರೆ. ಉಳಿದ ಟ್ರಸ್ಟಿನ ಸದಸ್ಯರು ಈ ಮಹತ್ವದ ಯೋಜನೆಗೆ ಬೆಂಬಲವಾಗಿ ನಿಂತಿದ್ದಾರೆ. ಸ್ವಾನ್ ಪ್ರಿಂಟ್ಸ್ ನ ಕೃಷ್ಣಮೂರ್ತಿ ಟ್ರಸ್ಟ್ ಕಂಡ ಕನಸನ್ನು ನನಸಾಗಿಸುವಲ್ಲಿ ಸಹಕರಿಸಿದ್ದಾರೆ. ಈ ಎಲ್ಲ ಮಹನೀಯರಿಗೂ ಕೃತಜ್ಞತೆಯ ನೆನಕೆಗಳು.

ದಿನಾಂಕ: 5–9–2016
ಶ್ರೀ ಗಣೇಶಚತುರ್ಥಿ

**– ಎಚ್.ಎಸ್. ವೆಂಕಟೇಶಮೂರ್ತಿ**
ಅಧ್ಯಕ್ಷರು, ಡಾ ಪುತಿನ ಟ್ರಸ್ಟ್ (ರಿ.)
(ಕರ್ನಾಟಕ ಸರ್ಕಾರ)

ದೇಗುಲವನ್ನು ಕುರಿತ ಒಂದು ಚಿಂತನಾಲಹರಿ ಈ ಪದ್ಯಗಳಲ್ಲಿ ಹರಡಿದೆ. ಈ ಪದ್ಯಗಳು ಒಂದು ಸ್ಥಾಯಿಭಾವವನ್ನು ವ್ಯಂಜಿಸಲು ನಿಯುಕ್ತವಾದವುಗಳಾದರೂ ಒಂದು ಕಾಲದಲ್ಲಾಗಲೀ ಒಂದು ಪರಿಸರದಲ್ಲಾಗಲೀ ಬರೆದಂಥವಲ್ಲ. ಏಕಧ್ಯಾನದಲ್ಲಿ ನಿಂತು ಬಹಿರ್ಮುಖನಾದಾಗ ಕಂಡ ವಿಷಯವನ್ನು ವರ್ಣಿಸುವುದು, ತಿರುಗಿ ಅಂತರ್ಮುಖನಾಗಿ ಆ ಅಂತರಂಗವನ್ನೇ ಬಹಿರಂಗಗೊಳಿಸುವುದು, ತಿರುಗಿ ಹೊರಬರುವುದು, ಪುನಃ ಒಳಹೋಗುವುದು,-ಹೀಗೆ ಈ ಕಾವ್ಯಕರ್ಮ ಒಂದು ವರ್ಷಕ್ಕೆ ಮೇಲ್ಪಟ್ಟ ಅವಧಿಯಲ್ಲಿ ನಡೆದಿದೆ. ಈ ಅನುಕ್ರಮಣಿಕೆಯಲ್ಲಿ ಒಂದು ಪದ್ಯದಿಂದ ಮತ್ತೊಂದಕ್ಕೆ ತಾರ್ಕಿಕ ಪ್ರಚೋದನೆ ಇಲ್ಲದಿರುವುದರಿಂದ ಇವು ಒಂದು ಸೂತ್ರಕ್ಕೆ ಕೋದಂತಿಲ್ಲದೆ ಒಂದೇ ಭಾವಗೋಳವನ್ನು ತಿರುವಿ ತಿರುವಿ ನೋಡುತ್ತಾ ಕಂಡ ಕಂಡ ಮುಖಗಳನ್ನು ಬಣ್ಣಿಸುವ ರೀತಿಯಲ್ಲಿವೆ. ಈ ಲಹರಿಗೆ ನಿಜವಾಗಿ ಕೊನೆಯಿಲ್ಲ; ಇಲ್ಲಿ ಕಾಣಬರುವ ಮುಗಿವು ನನ್ನ ಮನಸ್ಸಿನ ಸದ್ಯದ ರಿಕ್ತ ಸ್ಥಿತಿಯನ್ನೂ, ಧ್ಯಾನಾವಧಾರಣಾಕ್ಷಮತೆಯನ್ನೂ ಸೂಚಿಸುತ್ತದೆ, ಅಷ್ಟೆ. ಅತಿವಿಚಿತ್ರವೂ ಅತ್ಯಾಶ್ಚರ್ಯಕರವೂ ಆದ "ದೇಗುಲ"ವೆಂಬ ಮಹಾಭಾವವನ್ನು ಕುರಿತು ಎಂಥ ಬಣ್ಣನೆಯಲ್ಲಿ ತೊಡಗಿದರೂ ಕೊನೆಗೆ ಮನಸ್ಸು ಬೆರಗಿನಲ್ಲೇ ಉಳಿಯತಕ್ಕದ್ದು ಅನಿವಾರ್ಯ.

- **ಪುತಿನ**

ಕೃಷ್ಣ ಜಯಂತಿ, 9-9-1955

(ಮಲೆದೇಗುಲದ ಮೊದಲ ಮುದ್ರಣದಲ್ಲಿ)

೧

ಸಕಲ ಸಂದೇಹಗಳು ಬಳಲಿ ಬಳಗೈತಂದು
ಬಿಡುವ ಬಯಸುವ ತವರೆ, ಮಲೆಯ ದೇಗುಲವೆ,
ವಾಸ್ತವದೊಳಲೆದಿರವು ಪಡೆವರಿವಿನರಕೆಯಿಂ–
ದೊಡೆವಃಶಾಂತಿಯ ಮದ್ದೆ, ಮುನಿಹೃದಯಫಲವೆ,
ಒಂದೊಂದು ನಿಲುವಿನೊಳಗೊಂದೊಂದು ಸೊಗವಳಲ
ತೋರಿ ತಿರಿವೀ ಭವದ ನಿಶ್ಚಲಕೇಂದ್ರವೇ,
ಋಜು ಅನೃಜು ಋತ ಅನೃತ ಲೇಸು ಕೇಡೆಂಬ ಬೆಲೆ–
ಗಳವಡದ ಯೋಗಿಗಳ ಮುದದಿಂ ಸಾಂದ್ರವೇ,

ನಿಂತಿಹೆನು ನಾ ನಿನ್ನ ಬಾಗಿಲೆಡೆ ನಮ್ರನಾಗಿ
ನುಡಿ ತುಯ್ದು ಬವಣೆಗೊಳೆ ಭಾವಗಳ ಭಾರದಿಂ ತಲೆಯ ಬಾಗಿ.



## ೨

ಅಲ್ಲಿರಲಿ ಇಲ್ಲಿರಲಿ ಎಲ್ಲಿರಲಿ ತಲೆಬಾಗಿ
ನಾ, ತೆರೆದ ಮಲೆದೇಗುಲದ ಬಾಗಿಲಿದಿರು
ನಿಂತ ತೆರವಾಗುತಿದೆ ನನ್ನ ಕಂಗಳಿಗಾಗೆ
ಅರೆ ಬಾನು ಮರ ಹಕ್ಕಿ ಹೊಳ್ಳ ಹೂ ಹೊದರು
ಅಂತರಂಗದ ದೈವ ಮೂಲೆತಿರುಗಿನೊಳವಿತು
ಸನ್ನೆಗೈದಂತೆಯೇ ಮೈಗರೆವ ಪರಿಗೆ
ಒಂದು ನಗೆ ಒಂದು ನುಡಿ ಒಂದು ಚಲನದಿ ಹೊಳೆದು
ಆವುದೋ ನೆನವೊಸಗೆ ಮರಳುವುದು ಮರೆಗೆ

ಆ ನೆನಹಿನೊಸಗೆಗಳ ನಿಧಿಗೊಳುತ, ಗುಡಿಯೆ, ನಿಂತೆ
ನನ್ನ ಮಾನಸ ನಿನ್ನ ಶ್ಯಾಮಸುಂದರಗರ್ಭದೊಳಗವನು–
ತಡತಡಕಿ ತೀರದಂತೆ.



## ೩

ಅರಸಿ ತೀರದೊಲಾಸೆ ಕೆರಳೆ ನಾ ನಿಂತಿರುವೆ
ಮಲೆದೇಗುಲದ ಹೊರಗೆ ತುಂಬನೇ ಬಯಸಿ
ಅರಿವರಿತು ತೀರದಿಹ ಸೊಗಪಟ್ಟು ತೀರದಿಹ
ಅಳಲ ತಾಳುತ ತೀರದರಕೆಯನೆ ಮೆರೆಸಿ
“ಅಣು ಬೃಹತ್ತುಗಳಲ್ಲಿ ಕುಗ್ಗಿ ಹಿಗ್ಗದ ತುಂಬೆ
ಸೃಷ್ಟಿಯೆಷ್ಟುಂಡರೂ ತೀರದಿಹ ಸೊದೆಯೇ”
ಎಂದೊಲುಮೆ ತುಂಬಿನೊಳು ನಲ್ಮೆತುಂಬನು ಸೂಸಿ
ಅರಕೆ ತೀರಿದ್ದರೂ ನಲವು ತೀರದೆಯೆ

ಕಂಡ ದೇಗುಲದಿದಿರು ನಿಂತ ಮುನಿಸಂತರನು ನೆನೆದು ನೆನೆದು
ನನ್ನರಕೆ ತುಂಬಿಗಿದೆ ಇಂಬೆಂಬ ನಂಬುಗೆಯೊಳೇ
ತೊನೆದು ತೊನೆದು.



# ೪

ಮನೆಯಲ್ಲ ಮಠವಲ್ಲ ರಾಜನರಮನೆಯಲ್ಲ
ಇದು ನಾಟ್ಯಮಂದಿರ ಛಾತ್ರ ಸತ್ರವಲ್ಲ
ಜೀವ ಬಯಸುವ ಭೋಗದುಪಕರಣವಲ್ಲವಿದು
ಆವರ್ಥ ಘಟಿಸಿತೀ ತೆರ ಮಲೆಯ ಕಲ್ಲ?
ಗೋಪುರದ ತುದಿಯಲ್ಲಿ ಬಾನನೆತ್ತುತ ನಿಂತು
ಇರುಳನೊಳು ಮಿರುತಾರಗೆಯ ಮಾಲೆಗೊಳುತ
ಮೋಡ ಮುತ್ತುವ ಜಡೆಗೆ ಜಾಹ್ನವಿಯೆ ಜಾರಿಬರೆ
ಪಕ್ಕಕೆಳವೆರೆಸೆಕ್ಕಿ ಕಣ್ ಸವಿಯ ಕೊಳುತ

ಮೆರೆವಿದರ ದರ್ಶನವೇ ದುಡುಕಿಸುವುದೆನ್ನೆದೆಯ ನಡೆಯ
ಮನುಜಗಿದು ನೆಲೆಯಾಸೆಯೋ ಕಟ್ಟಕಡೆಯ?



## ೫

ಕರಣವಲಯದಿ ನಿಂತು ವಿಷಯವೈವಾಹಿಕದಿ
ಪಡೆವ ಸೊಗಗಳನೊಲ್ಲದೆಯೆ ಮುಂದೆ ಸರಿದು
ಮೈಜರೆದು ಮನಜರೆದು ಬುದ್ಧಿತರ್ಕವ ಜರೆದು
ಅದನೊಲ್ಲದಿದನೊಲ್ಲದಾವುದನೊ ತಿರಿದು
ಊರಿಗೊಂದಿರುಳಂತೆ ನೆಲದಿ ನೆಲೆಯಿಲ್ಲದೆಯೆ
ತಿರಿವ ತಿರುಕರ ಕಣಸೆ, ನಿನಗೆ ನೆಲೆ ಇಲ್ಲೆ?
ಜಡದಿಂದ ಜೀವಕ್ಕೆ ಜೀವದಿಂದಾತ್ಮಕ್ಕೆ
ಏರುತಿಹ ಸತ್ವವೇ, ನಿನಗೆ ಬಿಡುವಿಲ್ಲೆ?

ಮುಂದ್ಮೈದು ಕರಣಗಳ ಮೊನೆ ಹೊಳೆವ ಗೋಪುರದ ಗುಡಿಯೆ,
ಹಿಂದೊಂದೆ ಮನದ ಮೊನೆ ಮೆರೆವ ಮುಡಿಯ ಕಳಸದೆಡೆಯೆ!



## ೬

ಹೊಗುವಾಸೆಯಿಲ್ಲ, ಕಾಲ್ತೆಗೆವಾಸೆಯಿಲ್ಲ, ಸು-
ಮ್ಮನೆ ಮೇಲನಿಟ್ಟಿಸಿ ನಿಲ್ಲುವಾಸೆಯೆನಗೆ
ಬೊಂಬೆಗೂಡಿದ ತೆನೆಯ ಗೋಪುರದ ಬಾಗಿಲಿನ
ಕತ್ತಲೆಯೊಳಣಿಕಿಣಿಕಿ ಏರಲೆನ್ನ ಬಗೆ
ಆ ಕತ್ತಲೊಳಹೊಕ್ಕು ಮರಳ ಹೊರಹಾರುವೀ
ಗಿಳಪಾರಿವಾಳಗಳ ಭ್ರಮಣೆಯನು ಕಂಡು
ಅವ್ಯಕ್ತದಿಂ ವ್ಯಕ್ತ ಹೊರಬರುವ ನಟನೆಯನು
ಚಿಂತಿಸುವುದೆನ್ನ ಮನ ಬಲು ಬೆರಗುಗೊಂಡು.

ಏನುಳವುದೇನಳವುದೀ ಒಳಹೊಗುವಾಟದಲ್ಲಿ
ಏನಳವುದೇನುಳವುದೀ ಹೊರಬರುವಾಟದಲ್ಲಿ?



## ೭

ಕತ್ತಲದು ಕಗ್ಗತ್ತಲರಿವಾಳವರಿಯದೆಯೆ
ಮತಮತಗಳಟ್ಟಣೆಯ ಕಟ್ಟಿ ನಿಲುವಿರುಳು
ಸನಿಯವಷ್ಟನೆ ಬೆಳಗಿ ಕೊನೆಗೆ ಶರಣೆಂದೆಯೇ
ಎಲ್ಲ ಮತಿ ಮೈಗರೆವ ನಿಲುಗಡೆಯ ಹುರುಳು
ಉಳಿವುದೆಣಿಸುತ ಚಿತ್ತ ವಿಜ್ಞಾನದೊಳು ತೊಳಲಿ
ಅಳಿವುದೆಣಿಸುತ ಪರದ ಚಿಂತೆಯೊಳು ಬಳಲಿ
ವಿರಮಿಸುವ ಕಾಳವದು, ಶ್ಯಾಮನೆನೆ ಹೆಸರದಕೆ
ಅದರ ಕೈಯೊಳು ಜಗವ ನಾದಿಸುವ ಮುರುಳಿ

ಮನ ನಾದದಿಂ ಕಿವಿಯ ಮುಟ್ಟುತ ಮರಳಿ ಮನದೊಳಳಿಯೆ
ಏನಳಿವುದೇನುಳಿವುದಿಂತೆ ಸೃಷ್ಟಿಯಪರಿಯೆ?



## ೮

ಸಂದೆಗದ ಹರಿವಿನೊಳು ತತ್ವಗಳೆ ಹಿಮಫಲಕ
ಹಾಯುವಾಯಾಸದೊಳು ಮನ ಗಳಿಗೆ ನಿಲ್ಲೆ
ಆ ಸೋಂಕಿನೊಳೆ ಕರಗಿ ಮರಳ ಹೊಳೆಸೇರುವುವು
ಚಿತ್ತವಾಳ್ವುದು ಮರಳ ಆ ಹರಿವಿನಲ್ಲೆ
ಕರಣವಿರೆ ವಿಷಯಗಳು ಚಿತ್ತವಿರೆ ಚಿಂತೆಗಳು
ಜೀವವಿರೆ ಜಗವೆಂಬ ದ್ವೈಧವೇ ಮೆರೆಯೆ
ಆ ನಿಲುವೊಳದು ತೋರಿ ಈ ನಿಲುವೊಳದು ತೋರಿ
ಒಂದೊ ಜೋಡಿಯೊ ಎಂಬ ಸಂದೆಗವೆ ನೆರೆಯೆ–

ಕೊನೆಗೆ ‘ನಾ’ ನೆನೆ ನನ್ನ ದೈವವಂ ತೋರಿ
ಭಿನ್ನಿಸುವ ಗುಡಿಯೆ, ನಿನ್ನದೆ ಕೊನೆಯ ದಾರಿ?



## ೯

ಬೆರೆದರೂ ಬೇರೆಂದೆ ಸಮದೂರದೊಳು ಸರಿವ
ವಿಷಯಾತ್ಮಸಂಗಮಿಸುವಾನಂತ್ಯವೇ,
ಸೋಂಕಲರಿವೇ ಕರಗಿ ನೆನವೆಂಬ ನೆರಳುಳಿಯೆ
ಪ್ರತ್ಯಕ್ಷವೆನಲಾಗದಾನಂದವೇ,
ಪಡಆಲ್ಲವೆನಲಾಗದಪರೋಕ್ಷದನುಭವವೆ,
ಅರಿತಿಲ್ಲವೆನಲಾಗದಂದದರುಳೇ,
ಒಆವಂದಮನ್ನೆಸಗಿ ಒಲವ ಕೊಳೆ ಕೈತೆರೆಯು-
ತಾವರ್ತತೇಜದೊಳು ಬೆಳಗುವಿರುಳೇ,

ಮನಮನವ ಎಳೆಗೊಂಡು ಮುಡಿವ ಮೂರ್ತಿ,
ನಮ್ಮರ್ತಿ ಮಡುಗೊಳುವ ಗುಡಿಯೊಳೇ ನಿನ್ನ ಕೀರ್ತಿ?



## ೧೦

ಹಸಿರೆಲೆಗಳಂಜಲಿಯೊಳಾಂತು ರವಿ ತೇಜವಂ
ಜೀವಕರ್ಘ್ಯವನೆರೆವ ಬನದ ನಲವು,
ಕೆರೆಕೆರೆಯ ಹರಹಿನೊಳು ಜಲಹಾಸವನು ಮೆರಸಿ
ತಿರೆ ಬಣ್ಣಗೊಳಿಸುವೀ ಬಿಸಿಲ ನಲವು,
ಅಲೆ ಕೆದರೆ ತರು ಬೆದರೆ ನೀಲದಿಂ ಧುಮ್ಮಿಕ್ಕಿ
ಕೋಡಿಗೇರುತ ಗಾಳಿ ಮೊರೆವ ನಲವು,
ಬೆಳಕೆಲರು ಹಸಿರುಗಳ ಪೌತ್ರ ನಾನೀ ನಲವ
ನನ್ನ ಕರಣದಿ ಕೊಂಡು ನಲಿವ ನಲವು–

ಈ ನಲವು ಬೆರಗುಗಳ ಕೊಳುವಂತೆ ತೋರುತಿಹುದೀಕೃತಿಯ
ಚೆಲುವಿನೊಸಗೆ
ಆದಿಯಿಂದಿಂದಿಂಗೆ ನಡೆದ ದಣಿವನು ಕಳೆವ ಗುಡಿಯಿದಿರು
ಜನದ ಮಣಿಗೆ.



## ೧೧

ಹಣ್ಣಿನಿಂ ತರು ನಮ್ರ ಮೋಡ ಹನಿಯಿಂ ನಮ್ರ
ನೆರೆದ ಸಿರಿಯೊಳು ಪುಣ್ಯಪುರುಷ ನಮ್ರ
ಜ್ಞಾನಿಯರಿವಿಂ ನಮ್ರ ಆರ್ತನಳಲಿಂ ನಮ್ರ
ನೆಲೆಯರ್ತಿಗಿಂಬಾಗಿ ಭಕ್ತ ನಮ್ರ
ಭಾವಂಗಳಡಿದಿರಲು ಸತ್ ಕವಿಯು ವಾಙ್ನಮ್ರ
ವಿಪುಲದರ್ಶನ ಶಕ್ತ ಧರ್ಮನಮ್ರ
ಎಲ್ಲರಹಮನು ಕಳೆದು ವೃದ್ಧಮಾದೀ ಗುಡಿಯು
ಸಕಲಜನಕಾಯಿತಾದಾನನಮ್ರ.

ಇಲ್ಲಿ ಮಣಿದವನೆಲ್ಲೆಡೆಯು ಸೆಟೆದು ನಿಲುವ
ಇಲ್ಲಿ ಮೈಕುಗ್ಗಿದವನೆಲ್ಲೆಲ್ಲು ನೇರ ನಡೆವ.



# ೧೨

ಗುಡಿಯಿದಿರ ಮಣಿಗೆಯೇ, ಭೂಮಾವಿನಮ್ರತೆಯೆ,
ದುರ್ಭರಾಹಂಕಾರದಮನವಿಧಿಯೇ,
ಆನಂದವರಣದೊಳು ಸುಖಯಜ್ಞಕಲ್ಪವೇ,
ತರ್ಕಧೀಧರಗರಳಶಮನಸುಧೆಯೇ,
ಕೆರೆಯ ನೀರನು ಕೆರೆಗೆ ಚೆಲ್ಲಿ ವರವಪಡೆವಂದ
ಭರವಳಿದು ಹಗುರಪ್ಪ ಸಂ–ನ್ಯಾಸವೇ,
ತನಗು ಹಿರಿದುಂಟೆಂಬ ತಿಳಿವ ಹೊಳಪಿನೊಳಟ್ಟು
ಆತ್ಮ ಸಿಂಗರಗೊಳುವ ವಿ–ನ್ಯಾಸವೇ,

ನಿನ್ನಿಂದ ನಾನೆನ್ನದೆಲ್ಲವನು ತೆರುವೆ, ಮರಳಿ ಪಡೆವೆ
ಮಲಿನಶೋಣಿತವೆದೆಯ ಹೊಗುತುಸಿರ ಹಾಯ್ದುಬಹ
ತೆರದಿ ತೇಜವಡೆವೆ.



# ೧೩

ಪ್ರವಹಿಸಲಿ ಮುಗಿದ ಕೈ ಮೈ ನಳಗೆಯಿಂದೆಲ್ಲ
ನಮನಂಗಳೆನ್ನವಾ ಸಿರಿಪದದ ತಡಿಗೆ,
ಮಣಿಗೆಯೊಳು ಮದವಳದು ಋಣಗಳೆಲ್ಲವ ನೆನೆದು
ತಿಳಮೆಯೊಳು ಹರಿವೆನ್ನ ಚೇತನದ ಜತೆಗೆ,
ಕುಲ ವಿದ್ಯೆ ಸಂಸ್ಕಾರ ಹಿರಿತನಗಳೆಣಿಕೆಗಳ
ತಡಿಕೆಯೊಳು ಹೊಳೆವ ಕಳೆಗಳು ಭೂತಿನಿಧಿಗೆ
ಪ್ರವಹಿಸಲಿ ವಾತ್ಸಲ್ಯ ಮೈತ್ರ್ಯಗಳ ನೆನೆಕೆಯಿಂ
ನೆನೆದೆನ್ನ ಮನವಾ ಕರುಣೆ ತವರಿನೆಡೆಗೆ–

ಎದೆಯಪ್ಪೆ ನೆಲದ ತಂಪಂ ಧರೆ ಧರಿಸೆ ತನುಭಾರವಂ
  ಲಘಿಮೆಯೊಳು ಚಿತ್ತವಾಡೆ
ಬಿಡುವೆಂದರಿದೆ ಬಿಡುವಲಾ ನೆಲೆಬಿಡುಗಡೆಯ
  ಕಣಸಾಂತೆಲ್ಲವೀಡಾಡೆ.



# ೧೪

ಕುತುಕಿಗೆತ್ತಣ ಬಿಡುವು, ರಸಪದದ ಕನಸಿಗಗೆ
ಬಲುಕವಲೊಡೆದ ಬಾಳ್‍ಬಳಯ ದಾರಿಗನಿಗೆ
ಪಯಣದಾಯಾಸವನು ಮಣಿಗೆಯೊಳು ತೀರಿಸುತ
ಮರಳಿ ಕಂತೆಯ ಹೆಗಲಿಗೇರಿಸಿ ನಿಲುವಗೆ?
ಗುರಿಗೊಯ್ವನಿಟ್ಟಾವುದೆಲ್ಲ ಚಿಂತೆಗೆ ನಿಲುವೆ
ತನುಜೀವಮನದೊಡ್ಡಿಗಿದಕಾವ ಸಲ್ಮೆ
ಬಂಧನವಿದೇತರಿಂ ಏತರಿಂ ನಿರ್ಮುಕ್ತಿ
ಬಂದಿಯಾವಂ ಬಂದಿಗನಿನಾವ ನಲ್ಮೆ?

ಭೂತಾತ್ಮಸಾಂಗತ್ಯನಿರ್ವಾಹಕುಶಲವೀ ಜೀವಫಲಕ
ಭೂತಾತ್ಮರತಿಗೇಕೊದಗದೀ ಉಸಿರಿರುವ ತನಕ?



# ೧೫

ಇರುವಿನತ್ಯುಚ್ಚದೊಳು ಸೆಲೆವೊಡೆವುದಾನಂದ
ಶಿಶು ಸಾಧು ಸಂತ ಕವಿ ಯೋಗಿ ಮುನಿಗೆಟುಕಿ
ದುಃಖತೃಷ್ಣೋಪಶಮಜನ್ಯಸುಖವಲ್ಲವದು
ಭೋಗಕ್ಕೆ ಬಾರದದು ಶಿವಜಟೆಯ ತುಳುಕಿ
ತುಡಿವ ತಾರೆಯ ಬೆಳಕಿಗೀ ಬೆಳಕೆ ಚರಿತಾರ್ಥ-
ವೆನೆ ಜೀವಚೈತನ್ಯದಸಮತೇಜವದು
ವಿಷಯವಿಂದ್ರಿಯದೊಡನೆ ತಾಗೆ ಚೆಂಗೆಂಡವನು
ಕೆದರಿ ಚೇತವ ಸುಡುತ ಇರವನರುಹುವುದು-

ಆ ಕ್ವಚಿದ್ದರ್ಶನದೊಳಹುದೆಲ್ಲ ಚೇತನಕು ರಸದ ನೀರಡಿಕೆ
ಅದರಿನೀ ದುಃಖಶಮದೈವನಮನಂ, ಅದರಿನೀ ತಿಳಮೆಯಡಿಕೆ.



## ೧೬

ನಲವು ಮುಟ್ಟುತ ಸುಟ್ಟ ಕುರುಹಿಂದ ಕಪ್ಪಿಡಿದ
ನನ್ನ ಮನಕೆಂದು ಬಹುದಾ ಚೆಲುವು ಹೊಳವು?
ವಿಷಯಂಗಳೊಲ್ಲವಿದ ಆತ್ಮವೂ ಒಲ್ಲದಿದ
ರೂಪುಗೆಟ್ಟಿರುವಿದಕೆ ಆವೊಲವು ತೆರವು?
ಮುಗಿದೆತ್ತುಗೈಯಿದನು ಕೊಂಡೆತ್ತಿ ಸೆಳೆವರಾರ್
ಸುಮನಸ್ಕರಾಲಯಕೆ ನಿಷ್ಕಳಮಿದಾಗೆ
ಸಂದೆಗಂಗಳ ವರಿಸಿ ತಿಳಿವೆನಿತು ಸರಿದರೂ
ಅರಕೆಗೊಳದಿರವಿನೊಳು ನಿಶ್ಚಿಂತವಾಗೆ?

ನನ್ನಿರವಿನಾನಂದನಿಧಿಯಂ ಸುತ್ತಿರುವಹಂಪಣಿಫಣಾಪಾತ
ಪುನಃ ಪುನಃ ಪ್ರಣಿಪಾತದಿಂದಹುದೆ ಸಂಮೋದ ಸನ್ನಿಪಾತ?



# ೧೨

ಉಜ್ಜೀವಿಸಲು ಬಯಸಿ ಹಾತೊರೆದು ಹೊರನಿಂತು
ಗಾನ ಆಶ್ರಯವೆರೆವ ದಿವ್ಯ ಸಂಮುದವೇ,
ತನಗೆ ತಡೆಯಿಲ್ಲವೆನೆ ಕೃತಮನಶ್ಶ್ರಮಹಾರಿ
ಸುಭ್ರೂಕಟಾಕ್ಷಕ್ಕೆ ಮೊನೆಯೀವ ಬಲವೇ,
ಕುಶಲ ಪರಿಕರ್ಮದಿಂ ಶೃಂಗಾರಗೊಂಡು ಕಲೆ
ಬಾಡಿರುವ ಮೊಗವೆತ್ತಿ ಬೇಡುತಿಹ ವರವೇ,
ಸುಹೃದನನಹಂವಾದಿ ಅಪ್ರಮತ್ತಂ ಸಾಧು
ಪಾಪಿ ತಾನೆಂದೆಯೇ ಹಲುಬುತಿಹ ಪದವೇ,

ಎಂದು ನೀನೆತ್ತಲಾರಿಗೊಲಿವೆ – ಇದನರಿಯಲಳವೆ?
ನಿನಗೆ ಪಾತ್ರಾಪಾತ್ರದರಿವಿಲ್ಲ – ಅದಕೆ ನಾನಾಸೆಗೊಳುವೆ.



## ೧೮

ತೊರೆ ಹಾಡುತಿರೆ, ಚುಕ್ಕಿ ಸೂಜಿವೆಳಗಿಂ ಚುಚ್ಚಿ
ಮನಕೆ ಬಗೆಬಗೆ ಭಾವಗಳ ಹಚ್ಚೆಯೊತ್ತೆ
ಸೌಂದರ್ಯವಿಹ್ವಲಸ್ವಾಂತನೆನ್ನಾದರಿಸೆ
ಸೆಳೆದೆಲ್ಲ ದೆಸೆಗಳನು ನೆಲದುಸಿರು ಮುತ್ತೆ
ಅಪ್ ತೇಜಗಳು ಬೆರೆದ ತಿಳಿವೊನಲನನುಕರಿಸಿ
ನನ್ನೊಳಗು ಬಾಹ್ಯಾಂತರ್ಯಭೇದವಳಿಯೆ
ಅರಿವರಿವುಗಳ ಹರಳನೊಡವೆಗಳ ಹೊಳೆಸುತ್ತ
ಆಗಸದ ಬಾಗಿನಡಿ ಮಾಗುಟ್ಟು ಮೆರೆಯೆ

ಭೂಮಾನುಭೂತಿಯದ ಮರುಕೊಳಸುತಿರುವುದೀ ಶ್ರೀವಿಮಾನಂ
ಭೂತರಂಗದಿ ಜೀವ ಪಡುವೆಲ್ಲ ಪಾಡುಗಳ ರಸನಿಧಾನಂ.



## ೧೯

ರೂವಾರಿ ರೂಪಿಟ್ಟ ಕಲ್ಲಲ್ಲ, ಮೂರ್ತಿಯಿದು,
ಎಂತೆಂದರಂತಾಗಬಲ್ಲ ಬಯಲಲ್ಲ,
ಮನುಜನಳಲಂ ಮೂಡಿದೊಲುಮೆಮಾತ್ರವಿದಲ್ಲ,
ನ್ಯಾಯನಡೆಸುವ ನಿಷ್ಠುರದ ನಿಯತಿಯಲ್ಲ.
ಜಡದಿಂದ ಜೀವಕ್ಕೆ ಜೀವದಿಂದಾತ್ಮಕ್ಕೆ
ಆತ್ಮದಿಂ ರಸಪದಕೆ ಇರವನಿದ ಸೆಳೆವ
ಚೇತನಾಯಸ್ಕಾಂತ ಜಾನಪದ ಹೃಚ್ಛಕ್ತಿ;
ಮಾನುಷ್ಯವಿಲ್ಲಿ ಪಡೆವುದು ತನ್ನ ಬಿಡುವ.

ವಿಷಯಲಗ್ನಾನಂದವಂ ಬೇರ್ಪಡಿಸಲಾದ ತಂತ್ರಾಲಯ
ತೀರ್ಣಭವ ಯತಿ ಸಿದ್ಧ ಸಂಸ್ಪೃಷ್ಟದೇವಾಲಯ



## ೨೦

ತಾಂ ತೂರಿ ಬರುತಿರುವ ಮನಮನದ ಮಾಧ್ಯಮದ
ಚಿತ್ರಚಿತ್ರಾಕೃತಿಯ ತಳೆದೆಸೆವ ಬೆಳಕೋ
ಅವಿಭಾಜ್ಯವಾಗಿಯೂ ನೆನೆವವರ ಹಿತವರಿತು
ರೂಪಿನುಪಧೆಯ ಭೂಮಿ ಪತಿಕರಿಪ ತಳಕೋ
ಧ್ಯಾನಗಹ್ವರಮುಖದಿ ಕಪ್ಪು ಕಪ್ಪಲು ಬೀಳೆ
ಅಂಗಾಂಗದೊಳು ಚೆಲುವ ಹೊಳೆಸುತಿಹ ಕಳೆಯೋ
ರೂಪಮಿದಽಮಾನುಷಂ ಭಾವನಮಿದಮರ್ತ್ಯಂ
ಕಲ್ಪನೆಯಿದಾನಂದ ಕಲ್ಪವೆನೆ ಕಲೆಯೋ!–

ಬೆಳಕಲ್ಲ ತಳಕಲ್ಲ ಕಳೆಯಲ್ಲ – ಕಲೆಯಲ್ಲ...
ನಷ್ಟವಹುದೂಹೆಯಿಲ್ಲಿ
ಪ್ರಕೃತಿಯಿಂ ಪುರುಷನಿವ ತನ್ನ ತಾಂ ಪಿರಿದಿಡುವ
ಶ್ರೀಮೂರ್ತಿ ತಂತ್ರದಲ್ಲಿ.



## ೨೧

ಸ್ಫೂರ್ಜದೂರ್ಜಸ್ವಿತೆಯ ಚೈತನ್ಯದೊಂದೆಳೆಗೆ
ಜನ್ಮಲಯಲಯಗತಿಯೊಳುಳಯೇಟ ಹೊಡೆದು
ಕಾಲ ಬಲುಹಿಂದಣದ ಅದನೆ ಆ ಜೀವವನೆ
ಕಂಡರಿಸಿದೀ ತನುವು ಹೊಸದು ನನ್ನದಿದು;
ಬಗೆಬಗೆಯ ಪರಿಸರದ ವಾಸ್ತವವ್ಯಾಘಾತ-
ದೊಳಗಿರವ ನೆಲೆಗೊಳಿಸಿ ಹದುಳದೊಳು ನಡೆಸಿ
ಜ್ಞಾನಾರ್ಜನೋಪಾಯವೀ ಬುದ್ಧಿ ಅಂದಿನದು
ವರ್ತಿಸಿಹುದೆನ್ನೊಳಗೆ ತಾ ನವ್ಯವೆನಿಸಿ.

ಶ್ರೀಮೂರ್ತಿಪದಕೆರಗುತೀ ಸನಾತನಜೀವಮೀ ಸನಾತನ ಚಿತ್ತನೀತಂ
ಪಡೆಯುತಿಹ ದಿವ್ಯಾನುಭೂತಿಯಿದು ಅನುಭೂತಮನನುಭೂತಂ.



## ೨೨

ಜಾರುಗೆನ್ನೆಯ ಕಡೆಗೆ ಸುಳಿವಾಸೆ ದಿಟ್ಟಿಗಳ
ದಟ್ಟಿಸುತ ಓಲೆಮಣಿ ಮೊನೆವೆಳಗನೆಸೆಯೆ
ಕೈಮುಗಿವ ಪ್ರಮದೆಯರ ಕಂಕಣಗಳಲುಗುತ್ತ
ಕುಂಬಿಡುವ ಬಳುಕುಮ್ಮೈಗೆಚ್ಚರಿಕೆಯುಲಿಯೆ
ಅಂದಿನಿಂದಿಂದುವರೆಗೊಂದೆ ಏರಿಳಿತದೊಳು
ಶ್ರೋತ್ರಪಥಕಿಳಿದು ಬಹ ವೇದಬೃಂಹಿತಕೆ
ಮನದೆಲ್ಲ ಸದ್ದಡಗಿ ಮತ್ತೆಲ್ಲು ದೊರೆಯದಿಹ
ಗಾಂಭೀರ್ಯವಳವಡಲು ಸನ್ನಿಧಿಯ ಜನಕೆ

ಆ ಧೂಪವಾದೀಪವಾತಾಳಮೇಳಗಳ ಆ ಸರ್ವಸಂಘಾತದಿ
ಮೂಡಿಬಹ ದಿವ್ಯತೆಯ ದಿನದಿನವು ನಿಧಿಗೊಳುತ
ಕಳಕಳಪುದೀ ಬಿಂಬದಿ.



# ೨೩

ನಾ ನೋಡುನೋಡುತಿಹ ನೋಟವಿದ ನಾನರಿಯೆ
ಎಲ್ಲು ಕಾಣದ ಬೆರಗನಿಲ್ಲಿ ನಾ ಪಡುವೆ;
ಹೊರಜಗದ ನಿಜವಲ್ಲ ಭವದ ತೋರಿಕೆಯಲ್ಲ
ನಟನೆಯಲ್ಲಿದು, ನನ್ನಿ, ಎಂಥದಿದು ಎನುವೆ–
ಅಲ್ಲಿ ಮೊಳೆವಾಸೆಭಯಕಲ್ಲೆ ಶಮನವ ಕಾಣೆ
ಇಲ್ಲಿಗೈತಹ ಮಂದಿಯಚ್ಚರಿಯದಿರಲಿ
ಅಲ್ಲಿಯದನೇನನೂ ಒಲ್ಲದಿಹ ನಿಸ್ಪೃಹರು
ಇಲ್ಲಿ ತುಷ್ಟಿಯ ಪಡೆದ ಬೆರಗಿಗೇನೆನಲಿ?

ಆವ ತುಂಬಿಹುದಿಲ್ಲಿ ಎರೆವವರಿಗೆರೆವಷ್ಟನೀವ
ಮನತುಂಬುವಷ್ಟರಿವ ಎದೆತುಂಬುವಷ್ಟೊಲವ ಪಡೆಯೆ ಜೀವ?



# ೨೪

ತುದಿಗಾಲಿನೊಳು ನಿಂತು ನೋಡುತಿದೆ ಚೆಲುವಿಲ್ಲಿ
ಹುರುಳದೇನಿಹುದೆಂದು ಬೇಲಿಯಾಚೆ
ತುದಿಗಾಲಿನೊಳೆ ತಿಳಿವು ನೆಗೆದು ಕುಸಿದೇಳುತಿದೆ
ಕೌತುಕವದೇನೆಂದು ತಡಿಕೆಯೀಚೆ
ತನ್ನ ಜಂಘೆಯ ಬಲವನುಡುಗಿ ಕೆಡೆದಿಹುದಳಲು
ಹರಕೆಯೊಳು ಬಾಗಿಲೆಡೆ ಬೆತ್ತಲೆಯೊಳು
ತುಡಿತುಡಿದು ಧಾವಿಸುತ ಸಂಸಾರದುಗ್ರಭಯ
ಆಸರೆಯನೆರವುದೀ ಕತ್ತಲೆಯೊಳು–

ಭವ್ಯ ಪರಿವರ್ತನವನಾಶಿಸುತ ಜಗದೆಲ್ಲ ಚಿಂತೆ
ಕವಿದಿಹುದು, ಶಿವಭೂತಿಗನುವಪ್ಪ ಭೂತಗಣದಂತೆ.



## ೨೫

ಹುಲ್ಗರಿಯ ಬಳವಿಗೆಯ ಬಿಗಿದುಸಿರೊಳಾಲಿಸುತ
ಮೇಲೆ ಬಾಂದಳದಾಳವಳೆಯೆ ಹವಣಿಸುತ
ಶ್ವಾಸನಿಶ್ವಾಸದೊಳು ಒಳಹೊಕ್ಕು ಹೊರಬರುತ
ಲೋಮದೊಳು ರಕ್ತಕಣದೊಡನೆ ಪಯಣಿಸುತ
ತನ್ನ ಮೈ ಮೊದಲಾಗಿ ಜಗದೆಲ್ಲ ಕಾರ್ಯಗಳು
ತನಗೆ ಹೊರತಾಗಿಯೇ ಜರಗುವುದ ಕಂಡು
ಈ ದಿವ್ಯಸಂಭ್ರಮದಿ ತಾನನಾಹೂತನೆನೆ
ಇಲ್ಲಿ ತಾನಾರೆಂದು ಬಹುಖೇದಗೊಂಡು

ಸೃಷ್ಟಿಯನ್ಯತೆ ತರುವ ಸ್ವಾತ್ಮಾನುಕಂಪೆಯೊಳು ಕೊರಗುತಿರುವೆಲೆ
  ಅಹಂಭಾವ,
ನಿನ್ನ ಪರಿವೆಯ ಇಲ್ಲದಂದದೊಳು ತೊಲಗುತಿಹುದಿಲ್ಲಲಾ
  ನಿನ್ನ ಹೇವ!



## ೨೬

ಹೊಂಗಳಸ ಮಿರುಗುವೆಡೆ ಮೊನೆಗೂಡುವಾಗಸದ
ಮೊಳಕಾಲಿನೊಳು ಸರಿವ ಬಿಸಿಲಿನಂಗಳದ
ಸದ್ದಿರದೆ ತುಟಿಬೆರಳಿನೊಳು ಸುಳಿವ ಮಾರುತದ
ಪಾವಿತ್ರ್ಯದೊಸಗೆಯನು ತಳೆದು ಬಹ ನೆಲದ
ನೆನೆದೊಡನೆ ನೆರೆಗೊಳುವ ನೇತ್ರಾಂಬು ತೀರ್ಥಗಳ
ಹೊಗೆವೊಳಗನೇರ ಬಹ ದಿವ್ಯ ಭಾವಗಳ
ಸಿರಿಯೆಂಬ ಗುರಿಯೆಂಬ ಇಲ್ಲೆ ಉಪರತಿಯೆಂಬ
ತುಂಬುವಾಸೆಯ ಮನೋಬುದ್ಧಿ ಮಮತೆಗಳ

ಮಂದಿರದಿ ಸಂಘಟಿಸಿತಷ್ಟಧಾಭಿನ್ನವಾದೀಶ್ವರ ಪ್ರಕೃತಿರೂಪಂ
ಪ್ರಸ್ಫುಟಿಸಿತೀಯೆಡೆಯೆ ಸತ್ಯಶಿವಸುಂದರದ ಸಚ್ಚಿದಾನಂದ
ಸ್ವರೂಪಂ.



## ೨೭

ಇನ್ನಾರುಮರಿಯದಿಹ ಅರಿಯಿಸಲುಮಾಗದಿಹ
ಜೀವಾತ್ಮಸಂಸ್ಥೆಯಿದು, ಮಾತಿಲ್ಲ ತೆರೆಯೆ;
ಗೀತನೃತ್ಯಾಭಿನಯ ಶಿಲ್ಪಕವಿತಾಚಿತ್ರ-
ಗಳಗರಿದು ಈ ರಹಸ್ಯದ ಮುದ್ರೆಯೊಡೆಯೆ;
ಪರಿಸರದ ಪರಿಸರದ ಪರಿಪರಿಯ ಬೆಲೆಗಳೊಳು
ಆವ ಬೆಲೆಗೂ ತಗದೆ ಉಳಿವುದಿದು ಕೊನೆಗೆ;
ಜಗದಾವ ವಸ್ತುವೂ ಇದರಾಸೆ ರೇಖಿಸದು
ಜೀವಿ ಏಕಾಕಿಯಿವ ತಾನು ತನ್ನೊಳಗೆ

ಗುಟ್ಟುಗುಟ್ಟಿನ ಗಂಟು ವ್ಯಕ್ತಿವ್ಯಕ್ತಿಗಳೆಲ್ಲ;
ಈ ಗುಡಿಯುಮದರ ನಂಟು
ಈ ಮಹಾಗುಟ್ಟಿನೆಡೆ ಒಬ್ಬೊಬ್ಬನೂ ಪಡೆವ ಪಾರದರ್ಶಕತೆಯನು
ಅರಿವರಾರುಂಟು?



# ೨೮

ಅನ್ನೆವರಮರಿಯದಿಹ ತನ್ನ ದ್ಯುತಿಯುಚ್ಛ್ರುತಿಯ
ರತ್ನದೊಳು ಕಾಣುತ್ತ ನಲಿವುದಿನಕಿರಣ
ತಾನೆಯರಿಯದ ತನ್ನ ಪ್ರಸ್ಫುರಚ್ಚೇತವನು
ಕಂಪಿನಲಿ ಕಂಡು ನಲಿವುದು ನೆಲದ ಹರಣ
ತನ್ನಹಂಕಾರವನು ಶಮಿಸಿ ಮಮತೆಯ ತೊರೆದ
ಸರ್ವಮುಕ್ತನೊಳೆ ಮೆರೆವುದು ಸರ್ವಮಮತೆ
ತೋತೋರಿ ಮರೆಗೊಳುವ ಭೂತಭಾವಂಗಳೀ
ಅನಿಕೇತ ಕೇತನದಿ ಪಡೆಯುವವು ಸ್ಥಿರತೆ–

ತಾನೆಯಚ್ಚರಿಗೊಳುವ ತೇಜದೊಳು ಜ್ವಲಿಸುವುದು ಶೈವರಸ್ಯಂ
ಚಿತ್ತಕ್ಕೆ ವಶವಾದ ತೆರದೊಳಗೆ ಭಕ್ತರೊಳು ಭಗವದ್ರಹಸ್ಯಂ.



## ೨೯

ಡಿಂಭದೊಳು ಕಾಂಬುದೆಂದಸಮಗ್ರವಲ್ಲವಿದು
ಕುಂಭದೊಳಗಡಗಿದ್ದರೂ ಅಲ್ಪವಲ್ಲ
ತೀರ್ಥಪ್ರಸಾದಗಳ ಜೀವಾನುಕರಣದೊಳು
ಅದರಮರಭಾವಕ್ಕೆ ಮಾಲಿನ್ಯವಿಲ್ಲ;
ಕರಣಗಮಸೌಲಭ್ಯವೀ ಮಹಾಭಾವಕೆನೆ
ಎಲ್ಲ ಜೀವಕು ಇದುವೆ ತವರಾದುದೆನ್ನೆ
ವಿವಿಧಾಕೃತಿಯ ಮೆರೆವ ವಿವಿಧವಿಧಿಗಳೊಳೆಸೆವ
ಡಿಂಭ ಕುಂಭಗಳಂತೆ ಪೂಜೆಗಳ ಸನ್ನೆ.

ಪೂರ್ಣದಿಂ ಪೂರ್ಣವನೆ ತೆಗೆದರೂ ಪೂರ್ಣವೇ
    ಉಳಿವುದೆಂದು
ಪೂರ್ಣಾನುಭೂತಿಯನು ಪಡೆದು ಪೊರೆಯೇರಿದರು
    ಶಿಷ್ಟ ಸಂತತಿ ಡಿಂಭದಿದಿರು ನಿಂದು.



## ೩೦

ತಿರೆಗವಿಯೊಳವಿತಿರುವ ಲೋಹಗಳ ರತ್ನಗಳ
ಹೊರಬೆಳಕಿಗೊಪ್ಪಿಸುವ ರಕ್ತಿಯೊಸಗೆ
ಹೃತ್ಕುಹರದೊಳಗವಿತ ಸದ್ಭಾವಪುಂಜಗಳ
ಜಾಗರದಿ ನೆರೆಯಿಸುವ ಸೂಕ್ತಿಯೊಸಗೆ
ಮನದುಸಿರೆ ಹೊರಗುಸಿರನಾಡುವಂತೆಸಗುತಿಹ
ನಿತ್ಯನೈಮಿತ್ತಿಕೋತ್ಸವಗಳೊಸಗೆ
ಕರ್ಮಪ್ರವಾಹದೊಳು ತಾನೊಂದು ತೆರೆಯೆಂಬ
ಇದೆ ಅದರ ಕಡಲೆಂಬ ಮುಡುಪಿನೊಸಗೆ

ಕರ್ಮಭಕ್ತಿಜ್ಞಾನ ಕೈಂಕರ್ಯದೊಸೆಗಗಳ ನೆವವಾಯ್ತು
  ಗುಡಿಯ ಮೂರ್ತಿ
ಏಕರಸದೇರುವೆಯೊಳೆಸೆಯಲೀಯೆಡೆ ಎಲ್ಲ ಜೀವರರ್ತಿ.



## ೩೧

ಎಲೆ ಮನವೆ, ಮುದಶೀರ್ಷ ಜ್ಞಾನತನು ಶಮಪಾದ
ಪ್ರತ್ಯಕ್ಷಭವನಿವನ ಸಾರುತೇನೆರೆವೆ?
ಆಸೆಭಯಲೋಭಗಳನಾಧರಿಸುವೆರೆಕೆಗಳ
ಆಯ್ದಾಯ್ದು ತೋರ್ವುದರೊಳೇ ನಿನ್ನ ನಿಲವೆ?
ಪತಿಪುತ್ರಪಿತನೆಂಬ ಮಿತ್ರಬಾಂಧವನೆಂಬ
ಭವವಿತ್ತ ಫಲಕಗಳ ತಿರುವುತ್ತ ನಿಂತು
ಶೈವಕರುಣಾಂಶುಗಳ ಎಳೆಬಿಡಿಸುವೆಸಕದೊಳು
ದಿಂಡಿನೀ ಜೀವಾತ್ಮವನೆ ಮರೆವೆಯೆಂತು?

ಅಡಿಗೆರಗಿ ಶಮವಾಂತು ತನುವಪ್ಪಿ ತಿಳಿವಾಂತು ಮುಡಿಮುಟ್ಟಿ
    ಮುದವಗೊಂಡು
ಆ ಕರುಣೆವೆಳಗನೇ ನನ್ನೊಳಗೆ ಮಡುಗೊಳಿಸೆಯಾ
    ಹುರುಳ ಕಂಡು?



## ೩೨

ಅಭಯವಿನಯಗಳೆಂಬ ಷಡ್ಜಪಂಚಮದೊಳಗೆ
ಸದ್ಗುಣಸ್ವರಮೇಳ ಮೂಡುತಿಹುದು
ಬಗೆಬಗೆಯ ಬೆರೆತದೊಳು ತೆರತೆರದ ರಂಜನೆಯ
ಧೀರಾನುಭೂತಿಗಳ ರಸವ ತಳೆದು
ಅಂಥಾತ್ಮಶೀಧುಗಳ ಸಿಂಧುವೆನಲೆಸೆವುದೀ
ದೈವಸುಂದರಭಾವ ಜಾನಪದಿಕ
ಅದರುತ್ಸವಂಗಳೇ ನಮ್ಮ ಹೃದಯೋತ್ಸವಗ-
ಳದರೆಡೆಯೊಳೇ ಶಾಂತ ಭವದ ಪಥಿಕ.

ಶಿವದ ನೆಲೆಯನು ಬಲ್ಲ ವಿಪುಲಮತಿಗಳ ತಡೆದ ಧ್ಯಾನಬಿಂಬ,
ನೆನೆದೊಡನೆ ಕೊಳೆತೊಳೆದು ನಲವೆರೆದು ನಿಲ್ಲೆನ್ನ ಮನದ ತುಂಬ.



# ೩೩

ನಂದಿದರು ದುಸ್ಸತ್ವದಮನಸತ್ವೋನ್ನತರು
ರಾಮಕೃಷ್ಣಾದಿಗಳು ದಿವ್ಯಭೂತಿಗಳು
ಮತ್ತೆಲ್ಲು ಕಾಣದಿಹ ಬೆಲೆಗಳನು ಮಾನುಷ್ಯ
ಜೀವಿತದಿ ನೆಲೆಗೊಳಿಸಿದಭವಬಂಧುಗಳು
ಕರಣಗಳ ಪಾತ್ರದೊಳು ರುದ್ರರಭಸದಿ ಹರಿದು
ಬಲುಕೇಡುಗಳ ಬಳೆವ ಸಂಮೋದಧುನಿಯ
ಬಾಳ ಜಡೆಯೊಳು ತಳೆದು ಪಳಗಿಸಿದ ದಾಂತರು
ಅತ್ಮಕೃಷಿಕರು ಸೇರಿದರು ಬಂದ ಮನೆಯ–

ನಂದರುಸಿರಾಡುವರು ದೇವಮಂದಿರ ಮೂರ್ತಿ ಶಿಲ್ಪಗಳೊಳು
ಸುಂದರಾಗಮ ಗಾನ ನಿಗಮೋದ್ಗೃಣನ ಭವ್ಯಕಲ್ಪಗಳೊಳು.



# ೩೪

ಏಕಕಾಂಡದೊಳೆದ್ದು ಮೇಲೆ ಬಾನನು ತಾಗಿ
ಥಟ್ಟನಲ್ಲಿಯೆ ತನ್ನ ಕಟ್ಟ ಕಳೆದ ಬಗೆ
ಆಡುತಿಹ ಗರಿಗಳನು ದೆಸೆದೆಸೆಗೆ ಹರಹುತ್ತ
ನಿಂತ ತೆಂಗಿನ ಮೇಲೆ ಹರಿವುದೆನ್ನ ಬಗೆ
ನಡುವೆ ಗುಡಿಗೋಪುರದೊಲೆಸೆವ ಮಾಮರದೆಲೆಯ
ತುರುಗಲೊಳು ತಂಗುವುದು ತವರ ಕಂಡಂತೆ
ಗಗನದಮೃತದ ಮೊಲೆಯ ಸೀಪುವೆಲೆಗಳ ನಡುವೆ
ಮುದದ ಹನಿಯಾರಿಸುತ ತೇಮಗೊಳುವಂತೆ–

ನುಡಿಗೆ ಬಾರದ ಚೆಲುವಿನೊಳಸೊಗದ ಸಂಗಮವ ಬಿತ್ತರಿಸುತಿದೆ
 ವೇಣುಗಾನಲಹರೀ
ದೈವಚಿಂತಾಸಕ್ತಮಾದೆನ್ನ ಹೃದಯದೊಳು ಹೊಮ್ಮಲಂತಃ
 ಶರ್ಮಲಹರಿಲಹರೀ



# ೩೫

ಚೇತನ ಪ್ರತ್ಯೇಕ ಚಿದ್ಭೂತಿಯೇ ನಲವೆ,
ನಿನ್ನ ಹಸಿರಾರುವುದು ನುಡಿತೇರು ಹರಿಯೆ
ಸೂಕ್ಷ್ಮ ನೀ, ದಿನಬಳಕೆ ನುಣ್ಣ ಮಾತಿದು ತೋರ
ಅರಿದಿದಕೆ ನಲುಗಿಸದೆ ನಿನ್ನ ಹಿಡಿಯೆ.
ಇದನರಿತೆ ಪೂರ್ಣಕಲಶ ಕೂರ್ಚಾಂಕುರ ಭೇರ
ಮುದ್ರಾದಿ ತಂತ್ರಗಳ ಸಂಕೇತದಿ
ಕಟ್ಟುವರ್ಥದ ಪಾಶವುಡುಗುತಿಹ ಮಂತ್ರಗಳ
ನೆರವ ಕೋರುವನು ಆತ್ಮಪ್ರವಾದಿ.

ಹಾ ನಲವೆ, ನಿನ್ನ ತಡೆದಿಡಲೆನ್ನ ಜಾಗರದೊಳಿಲ್ಲ ಜಾಗ
ಕಂಡ ಜಡಜಂಗಮಕೆ ಕೈಯ ಜೋಡಿಸುವುದೇ ಕುಶಲವೀಗ.



## ೩೬

ಸಂಸ್ಪೃಷ್ಟ ದೇವಾಂಶುಸಿಕ್ತರೀ ಭಕ್ತಜನ
ಆತ್ಮಸವಿದರ್ಶನೋತ್ಸೃಷ್ಟಭವರು
ಮನದ ಮಾಗಿಯ ಕಳೆದ ಚಿದ್ವಸಂತೋತ್ಸವರು
ಮುದದ ತುಂತುರನು ಸಿಂಪಿಸುತ ನಡೆವರು
ಕಣ್ಣಿಗಳವಡುವೆಲ್ಲ ವಸ್ತುಗಳು ಮೆರಸುವೊಲು
ತಮ್ಮ ಹೊಳೆಸುವ ರವಿಯ ತೇಜದಲೆಯ
ಗವಿಯುಳಿದ ಹೊನಲಿನಂತಿವರೆನಗೆ ಹೊಳೆಸುವರು
ಗುಡಿಯೆಲ್ಲೆಯನು ಕಳೆದ ದೇವಕಳೆಯ–

ಪ್ರೇಮನ್ನೈರ್ಮಲ್ಯ ನಮ್ರತಾಸಂತೋಷಸಂಭೂಷಿತಮಿದು
ಜೀವಾತ್ಮ ಸಂದೋಹ; ಅಜಮನಸ್ಸಂಜಾತರಾದಿಮರ
ತೆರನೆಸೆವುದು.



# ೩೭

ತುಂಬುಪೆರೆಯನು ಕಂಡು ಕಡಲುಬ್ಬಿ ಹರಿವಂತೆ
ದೇಗುಲದೊಳುಬ್ಬುವೀ ಜನವ ಕಂಡು
ಉಬ್ಬುವುದು ನನ್ನ ಮನ ಮತ್ತೆಲ್ಲ ತಾಳದಿರು-
ವುಬ್ಬಿನೊಳು ಹಬ್ಬುಗೆಯ ರಸವ ಕೊಂಡು
ದಿವ್ಯ ನೀಲದ್ಯುತಿಯ ಹನಿಯನುಣಿಸುವ ಹೀರ-
ಮುಕುಟದೆಳೆನಗೆಯ ಸುಂದರಮೂರ್ತಿಯ
ಕಂಡು ತರ್ಕದ ಬಿಗುಹ ಕಳೆದೆನ್ನ ಹೃದಯವಿದು
ಅರಳುವುದು ತಳೆದು ನೂತನದರ್ತಿಯ.

ಕಣ್ಣಿಗಾಗಿಹುದೆನಗೆ ಆತ್ಮವೇ ವಿಷಯದೆಡೆ ತೊಳಗುವಂತೆ
ರಹಸ್ಯರಸಚಿಂತನವೆ ಬಾಹ್ಯದೊಳಗೀತೆರದಿ ಮೊಳಗುವಂತೆ.



# ೩೮

ಭವದ ಗರಳವ ಗುಡಿಯ ಶಿತಿಕಂಠದೊಳು ಶಮಿಸಿ
ನವಜಾತಚಿತ್ತದೊಳು ಜೀವ ರಮಿಸೆ
ತೊಳೆದ ಮುಕ್ತಾಫಲದ ಕಾಂತಿವೆತ್ತಾತ್ಮವಿದು
ಹೊರಗಲೆವ ನಲವಿನುಸಿರಾಡಿ ಜ್ವಲಿಸೆ
ಹೊಗುಹೊಗುತ ಹೊರಬರುವ ಮಾನುಷ್ಯವಾಹಿನಿಯ
ಕಲ್ಲೋಲಲೀಲೆಯೊಳು ದಿಟ್ಟಿಸಲಿಸಿ
ಶಂಖಜಾಗಟೆದನಿಯ ಕೈವಾರದೊಳು ನಾಮ–
ದುಗ್ಗಡಣೆಯಿರಿವಿನೇರುವೆಯಾಲಿಸಿ

ಮಂದಿರಪ್ರಾಕಾರಸೋಪಾನದೊಳು ಕುಳಿತು ಪಡುವ ಬಿಡುವಿನ
　　ಸೊಗಕು ಮಿಗಿಲ ಕಾಣೆ
ವಿಷಯಮಾತ್ಮಸಂಬದ್ಧರಸದ ಬೇಹರದೊಳಗೆ ಸಫಲವೀ
　　ದೇಗುಲದ ಲೇಣೆದೇಣೆ.



# ೩೯

ಜಡಜಡವನೆಳದಾಡಿ ಮನಮನವ ತಾಗಿಸುತ
ಕರ್ಮದೊಡ್ಡಿನೊಳಹವ ನೂನೂಗುತಿರುವ
ಜೀಯ ನಿಮ್ಮ ಹಸಾದರೆಂಬರುರವಟೆಯೊಳಗೆ
ಸಾಗುವರಸರ ವಿಭವದುತ್ಸವದ ತೆರವ
ಕಂಡು ಕುಶಲವ ಪಡದ ಕಂಗಳವು ಹೊಂಗುವುವು
ತುರೀಯೋಪಾಂತ್ಯದೊಳು ವಿಹರಿಸುತಲಿರುವ
ಯಾತ್ರಿಕರ ಕಾಣುತ್ತ, – ಹಗುರಾದ ಜೀವವಿದ
ರಸಪದಕೆ ಎತ್ತೆತ್ತಿ ಆತುಕೊಳುತಿರುವ.

ಕುಡಿಕುಡಿಯೆ ಉಸಿರಾಡಿ ಉಂಡುಟ್ಟು ನಾನೆಂದು ನಿಂತ
 ಸಾಹಸದ ಸಲ್ಮೆ
ದೇಗುಲದ ನೆವದೊಳಗೆ ದಿವ್ಯತೆಗೆ ಬವಣೆಗೊಳುವಂಥ
 ಮನುಜರ ಕಾಂಬ ನಲ್ಮೆ.



# ೪೦

ಸಿಡಿಲ ಪಳಗಿಸುವರಿವು, ರವಿಯ ಸೆರೆಹಿಡಿವರಿವು
ಸಾಗರದ ತಳಮುಗುಚಿ ಸೂರೆಗೈವರಿವು
ಬಾನ ಜಾಲಾಡುತ್ತ ತಾರೆಗಳನಳೆವರಿವು
ಸೂಕ್ಷ್ಮಾತಿಸೂಕ್ಷ್ಮವನು ಬಯಲುಗೈವರಿವು
ವಸ್ತುಗಳೊಳವಿತಿರುವ ಸೆಳೆತಗಳ ಹವಣರಿತು
ಸೊಗಕೆ ನವಸಂಘಾತಗಳ ನಿಲಿಸುವರಿವು–
ಇದನು ಕಿತ್ತದನೆಸೆದು ದುರ್ದಮ್ಯ ಪಟುತೆಯೊಳು
ಅಂಗಳದೊಳಾಡುವಿದ ನೋಡುತಿದೆ ಇರವು!

ಎಲ್ಲ ವಿಕೃತಿಯ ತಳದ ಸತ್ವದೀ ವಾತ್ಸಲ್ಯದೃಷ್ಟಿಯನು
  ರೂಪಿಸುವೊಲು
ಸಿರಿಯೊಡನೆ ಸಿರಿರಾಯನುತ್ಸವದಿ ನಿಂತಿಹನು ಕಡುಸವಿಯ
  ಮೆಲುನಗೆಯೊಳು.



## ೪೧

ಉಗ್ರನೊಳಗುಗ್ರನ ಶಾಂತನೊಳು ಶಾಂತನ
ಉದಾಸೀನನೊಳುದಾಸೀನನನ್ನು
ಒಲಿವವರೊಳೆತ್ತುವನ ಹಗೆವವರೊಳಳಿಸುವನ
ಇಂತೆಲ್ಲಪರಿಯೊಳೂ ಕಾಂಬನನ್ನು
ಅದು ಅವನು ಅವಳೆಂಬ ಬಗೆಬಗೆಯ ನೆಲೆಯೊಳಗೆ
ಸೊಗದುಕ್ಕಗಳ ನನಗೆ ತೋರುತಿಹನ
ಕುರಿತು ಚಿಂತಿಸೆ ಬೆರಗ ತರುವವನ ಎಂತು ನಾ
ಮರೆವೆ ಸಕಲಾಂತಸ್ಥವಿಪುಲಮುಖನ?–

ಅವಗೆ ನಾನೀ ಮೂಲೆಯೊಳಗಾದೆ ಭವಲೀಲೆಯುದ್ವೀಕ್ಷಣಗವಾಕ್ಷ
ಎನ್ನಹಂಕೃತಿಪದದೊಳದನೆಲ್ಲ ನಿರುಕಿಸುತ ಬಿನದಗೊಳೆ ಸರ್ವಪಕ್ಷ.



# ೪೨

ಜಗದೆಲ್ಲ ಜೀವಿಗಳ ಕರ್ಮರಸ ಪಾದಪಂ
ಜೀವವಿದು ಮರ್ಮರಿಸುವುಲಿಯೆಲೆಯೊಳು
ಆ ಬೆಳಕಿನುಸಿರಾಡಿ ಮೂಲಸತ್ವದ ಹೂಗಳ
ತಳೆದು ಕಂಪಿಸುತಿಹುದು ಸಡಗರದೊಳು.
ಹರಣವೆ ಹಸಾದವೆನೆ ವಿಶ್ವ ಶಿವಪದವೆನ್ನೆ
ನಲವೆಲ್ಲೆಗೆಡೆಸಿಹುದು ನಡುಗಡ್ಡೆಯ;
ಎಲ್ಲ ತಿಳಿವನು ಕಳೆದು ನಗ್ನವಾಯ್ತೆಚ್ಚರಿಕೆ,
ಗಳಹುತಿಹೆನಳಿದು ಬಲ್ಲರ ಸಡ್ಡೆಯ.

ಮೊರೆವ ಸೊದೆಯಲೆಗಡಲ ನಂಜಿನೊಳು ಪವಡಿಸಿಹನ
ಕವಿದು ಬಹ ಮುದದ ನಡುವಣ ಚಿತ್ತದೊಳಗಿಡುತಲವನ.



# ೪೩

ಹಸಿರಿನೇರುವೆ ಹಗಲಬೆಳಕಿನೊಳು ಬೆರೆದಂತೆ
ಸಂಜೆಮುಗಿಲಿನ ಮಳಲೊಳೋಲಗಿಸುವಂತೆ
ಭೀಷ್ಮ ಜಲಪಾತದೊಳು ಸ್ಥಿರಚಂಚಲೇಂದ್ರಧನು
ಎಸೆವ ಪರಿ ಭವದ ಮೇಲಾಡುತಿರುವಂತೆ
ಬಣ್ಣ ಬಣ್ಣದಿ ಬೆಳಕ ತಡೆದಿಡುವ ಹೂ ಮರಗ–
ಳಲುಗಿನೊಳು ಬಂದ ತೆರಳದನೆನ್ನುವಂತೆ
ಮಲೆಯ ಘನಮೌನದೊಳು ಕನಸಾಂತು ನಿಂದಂತೆ
ಕೆಂದಳಿರ ಹೊಳೆಹಿನೊಳು ಉಯ್ಯಲಾಡುವಂತೆ,–

ನನ್ನರಿವಿನೀ ಮನೆಯೊಳಂಜಿಯಡಗಿರುವಂಥ ಮುದದಾಪ್ತಗೆ
ಸನ್ನೆಗೈವನು ಹೊರಗೆ ಚೆಲುವುದೊರೆ ಬಳಿಯ ಸಾರೆಂಬ ಪರಿಗೆ.



# ೪೪

ಇದು ಇನಿತೆ ಎಂಬಂತೆ ಕೊರೆಯಿಲ್ಲವೆಂಬಂತೆ
ಕಾಣುವನಿತೆ ಪೂರ್ಣವೆಂಬ ತೆರದಿ
ನೆಲದುಬ್ಬಿನೀ ಮಲೆಯ ತಲೆಯ ಗುಡಿ ಮೊನೆಯಿಂದ
ನೆಲವ ಕವಿವೀ ಬಾನ ನೀಲಿಮೆಯ ತಲದಿ
ಸೃಷ್ಟಿಯೆಲ್ಲವ ತುಂಬಿ ಹಸರಿಸುವ ನಿಸ್ಸೀಮ
ಸದ್ಭಾವಕೇಂದ್ರದೊಳು ವಿಶ್ರಾಂತನಂತೆ
ಎಲ್ಲ ಬೆಲೆಗಳನಳಿದು ಸರ್ವಸಮವಾಯದೊಳು
ಪ್ರಸ್ಫುರಿಸುತಿರುವಿರವಿನೆದೆಮಿಡಿತದಂತೆ

ನಾನಿಹೆನು ಇಹೆನೆಂಬ ನಿರ್ವಿಷಯದರಿವಿನೊಳು ಏಕನಾಗಿ
ಸರ್ವತಶ್ಚಕ್ಷುವೆನೆ ಸರ್ವತಃ ಶ್ರೋತ್ರನೆನೆ ಮೂಕನಾಗಿ.



## ೪೫

ಮರದೊಳೆಂತೋ ಅಂತೆ ತುಂಬೊಲುಮೆ ಸಂತನೆಡೆ
ನಿಶ್ಶಂಕೆಯೊಳು ನೆರೆವ ಹಕ್ಕಿಗಳ ತೆರದಿ
ನಿಸ್ತಬ್ಧನೆನ್ನೆಡೆಗೆ ಬಹ ಭೀರುಭಾವಗಳ
ಕೆಳೆಯ ನೋನೋಡೆಂದು ಸರಸ ಕೌತುಕದಿ
ನುಡಿಬೆರಳ ನೇವರಿಕೆಗಳವಡುವ ಹಲಕೆಲವ-
ನಾದರಿಸಿ ತೋರುತಿಹೆ ವೃತ್ತ ವೃತ್ತದೊಳು
ಜೀವಜೀವದ ನಡುವೆ ಹರಿದೆನ್ನ ಜೀವವಿದು
ಪಡೆಯುತಿಹ ನಿರ್ವೃತಿಯ ಚಿತ್ರ ಚಿತ್ರದೊಳು

ಹಿರಿಗಾಳಿ ಹೆಗ್ಗಡಲು ಬಯಲು ನೆಲ ಬೆಂಕಿಗಳಗೊಳಗ ನೀಡುವ
  ದಿವ್ಯದೇವಕುಲದಿ
ದೀಪ್ತಚಿತ್ತವ ಹೊಗುವ ವಿವಿಧಾನುಭೂತಿಗಳ ಕಾಂತಿಯೊಳು
  ನನ್ನೊಳಗ ಮೆರೆಯಿಸುವ ಭರದಿ.



## ೪೬

ಸುಪ್ತಿಯೊಳು ಭವವಿಲ್ಲ ಸ್ವಪ್ನದೊಳು ಋತವಿಲ್ಲ
ಜಾಗರದಿ ಋತಜುಷ್ಟ ಭವವೇಳ್ವುದು
ಜಾಗರದಿ ರಸದತ್ತ ಕುಡಿವರಿಸಿ ಭವದೊಳಗೆ
ಹಿಂಜರಿದು ಋತ ಸತ್ಯಕೆಡೆಗೊಡುವುದು
ಭಾವಾವಲಂಬಿಯೀ ಸತ್ಯವೆಂಬಿಹದ ಬೆಲೆ
ಸ್ವರ್ಗಾದಿ ಲೋಕಗಳಿಗದುವೆ ತಲವು
ಇಂದ್ರಾಗ್ನಿವರುಣರನು ದೇವರನು ಹೊರೆವುದದು
ಅದರಿನಪ್ಪುದು ನರಗೆ ಚೆಲುವಿನರಿವು

ಸತ್ಯ ರಸದುಪನಗರ, ಎದೆಯೆಲ್ಲ ಕಳೆಗಳೂ ಹೊಳೆವವಲ್ಲಿ
ರಸಪದದೊಳೋ ಬರಿಯ ನಲವಿಹುದು ತುಂಬಿನೊಳು
ಸತ್ಯವನೆ ಚೆಲ್ಲಿ.



# ೪೭

"ಚೆಲುವನಾರಾಯಣಾ ಎಂಬುಲಿವು ಕಿವಿಸೋಕೆ
ಮಳಮಳನೆ ಕಣ್ಣ ಹನಿಯುದುರುವುದು" ಎಂದ
ಸತ್ಯಲೋಕನಿವಾಸಿ ರಸಕಾತರಂ ಮೌನಿ
ನನ್ನ ಉತ್ತರಿಸಲೀ ಭಾವಗಳ ತಂದ.
'ಹರಿ' ಎನ್ನ ಗರಿಕೆದರಿ ರೆಕ್ಕೆ ಹರಡುವ ಸಂತ–
ಚಿತ್ತದನುಕರಣೆಯೊಳು ಹಂಸಗತಿಗೆರೆದು
ದುರ್ಬಲಸ್ವಾಂತವಿದು ದೇವಕುಲನೀಡದೊಳು
ಚಡಪಡಿಸುತಿದೆ ತನ್ನ ಎಳಮೆಯನೆ ಮೆರೆದು;

ಕಾಮಭಯಲೋಭಾದಿ ಧೀವರರು ಹೊಂಚಿರಲು
ಆತ್ಮದಾಮಿಷಕೆ ಕೆಳಗೆ
ಕರುಣಿಸದೆ ನೋಡುತಿದೆ ಸಾಧುತತಿ ನಸುನಗೆಯ
ನೋಟದೊಳೆ ಕುದುರಿಸುತ ನಿರ್ಭಯವನೊಳಗೆ



# ೪೮

ಕಡಲಿನಾವಿಯನೆತ್ತಿ ತಿರೆಗದನು ಮರೆಮಾಡಿ
ಮುಗಿಲ ಮೇಲೆಯೆ ಬೆಳಗುವಿನತೇಜದಂತೆ
ಭವಕವಿದ ದುರ್ದಿನದೊಳದರ ಮೇಲಾಡುತಿಹ
ರಸದ ತೇಜಕೆ ಜೀವ ಹಂಬಲಿಪುದಿಂತೆ.
ಆ ಮುಗಿಲ ಬಿಡಿಸುತಾ ಕಿರಣಗಳಗಿಳೆಸೋಂಕ
ತಂದು ಕತ್ತಲ ಕಳೆವ ಶುಭಕಲ್ಪಗಳನು
ಸುಂದರಾಗಮಕಲಿತ ದೇವೋತ್ಸವಂಗಳನು
ಸರಸಸಜ್ಜನಗೋಷ್ಠಿಸಲ್ಲಾಪಗಳನು

ಆದರಿಸದೀ ನೆಲದ ಮನದ ಭವದುಲ್ಬಣಕೆ
ಮರುಗಿ ಶುಙ್ಮಲಿನನಾಗಿ
ಸಂತಾತ್ಮವೈಭವದ ಮಲೆಗುಡಿಯ ನೆನೆದಿಂತು
ಸಂಹೃಷ್ಟನಾದೆನೈ ಕೊರಗ ನೀಗಿ.



## ೪೯

ಎಳೆತನದಿನಿಂದುವರೆಗೀ ಜಗದ ಬೆರಗ ನಾ–
ನಳಿಯದಂತಿರಿಸಿಹವು ವಸ್ತು ವ್ಯಕ್ತಿ
ಅಲ್ಪವಿವು ಸಾಮಾನ್ಯವೆನೆ ಪ್ರಕಟಗೈಯುತ್ತ
ತಮ್ಮತುಲ ಸುಖದುಃಖವೀವ ಶಕ್ತಿ.
ತನಗೆ ತನ್ನರಿವಷ್ಟೆ; ಮಿಕ್ಕುದರ ತಿಳಿವೆಲ್ಲ
ಭ್ರಮೆಯೆನಿಸುವೀ ತೋರ್ಕೆಯರಿವರಾರು?
ನೆಚ್ಚಿದರ ವಂಚಿಸುವ ವಿಷಯಗಳ ಸಂಚಿನೊಳು
ಮುದದ ಹದುಳವ ಭವದಿ ಪಡೆವರಾರು?

ಅದರಿನರಸುವರಲ್ತೆ ಋದ್ಧಸತ್ವರು ಸ್ವಯಂಜ್ಯೋತಿಷ್ಟದ
ನಿರ್ಬಲರಿಗೆಮಗಾಯಿತವರ ಕರುಣೆಯೊಳಂಥ ದೇವಮಂದಿರ
ಶಿಲ್ಪಕಲ್ಪದ ಹದ.



## ೫೦

ಮೈಯಾಸರೆಯ ಜೀವ ಗಳಿಗೆಯಿರವಿನದೆನ್ನೆ
ಅರಿಷಟ್ಕತಂತ್ರದಿಂ ನಿತ್ಯತೆಯನು
ಗೆಲುವುದದು ಜನಿಜನಿಸಿ ಜಡದೊಡನೆ ಸೆಣಸುತ್ತ
ಪ್ರಭುವೆನಿಸಿ ಇಚ್ಛೆಗಳವಡಿಸಿ ಅದನು.
ಜೀವದಾಸರೆ ಚಿತ್ತ; ಅದರೊಡನೆಯುಳಿವಳಿವು;
ದಿವ್ಯಾನುಭೂತಿಗೂ ಮೂಡು ಮುಳುಗು;
ಯಮನಿಯಮಧ್ಯಾನಾದಿ ತಂತ್ರದಿಂ ತನ್ನುಳಿವ
ಸಾಧಿಸುವುದಾತ್ಮವೂ ಜೀವದೊಳಗೂ.

ಧೀಮಂತರುದ್ದೀಪ್ತಚಿತ್ತದುಳಿವನು ಮೆರೆವ ನಾರಣನ
    ಕರುಣಾಕಟಾಕ್ಷ
ಆವ ರಸಪದಪಥಿಕನಾತ್ಮಕ್ಕೆ ಕೊನರಿಸದು ತಾರ್ಕ್ಷ್ಯಪಕ್ಷ?



## ೫೧

ಆ ಕರುಣೆಯೆಳನಗೆಯ ಕಡೆನೋಟದೊಂದು ಕಳೆ
ಮನಕಿತ್ತ ಸದ್ಭಾವ ಸಂದೀಪ್ತಿಯೊಳಗೆ
ನನ್ನೊಳಗು ಹೊರಗು ನಾ ಗುಡಿಬಳಸಿನೊಳಗಲೆದ
ಚರಿತಾರ್ಥವೆಡೆಗೊಂಡಿತೀ ಕಬ್ಬದೊಳಗೆ.
ಜೀವ ಮಾನುಷ್ಯದೊಳು ಪಡೆವಮಿತ ಭಾವಗಳ
ಪಾರಮ್ಯವಿಲ್ಲೆಂಬ ಭೂಮಾನುಭೂತಿ
ಋತಸತ್ಯ ಸಂಜನ್ಯ ರೂಪಸಂಕೇತಗಳ
ಸೂಕ್ತಿ ಸಂಗೀತದೀ ದೇಗುಲದ ರೀತಿ

ಜೀವವಿದು ಆತ್ಮದೂಷರವಾಗದಂತಿಡುವ ರಸದ ಚಿಲುಮೆ
ಜಡರ ಚಿತ್ತವ ಮುದದ ಮೊನೆಗೇರಿಸಲು ಬಗೆದ ಸಿದ್ಧರೊಲುಮೆ.



**ಸರ್ವಕರಣದಿ ನಿಂತು ತಾಮಸೀ ವೃತ್ತಿಯನು**
**ಪರಿಶಮಿಸಲಿಷ್ಟದೈವ**
**ಎಲ್ಲರರಿವೊಳವನಿರವ ಕೀರ್ತಿಸುವ ತೆರದೊಳಗೆ**
**ಮೆರೆಯೆ ಸದ್ಭಾವ.**

ಆಸುರಕಾಸುರವೆನ್ನುತ
ಹೇಸದೆ ಕೊಂಡುಗ್ರರೂಪಮಂ ಬಳಿಕೀ ಯೋ–
ಗಾಸನದೊಳಗದ ಶಮಿಸುವ
ಭಾಸುರ ನರಸಿಂಹನೆಮಗೆ ಮಂಗಳನಕ್ಕೆ.

ಅರಿಷಟ್ಕಂ ಬೆದರುವ ವೋಲ್
ಅರಿಶಂಖಗದಾಯುಧಂಗಳಂ ಮೆರೆಯಿಸುತಂ
ಅರಿತರ್ಗೇಭಯ? ಸರ್ವಂ
ಹರಿಮಯವೆಂದಭಯವೀವ ನಾರಣ ಶರಣಂ

## ಧ್ಯಾನ

ನಮೋಸ್ತ್ವನಂತಾಯ ಸಹಸ್ರಮೂರ್ತಯೇ
ಸಹಸ್ರಪಾದಾಕ್ಷಿ ಶಿರೋರುಬಾಹವೇ
ಸಹಸ್ರನಾಮ್ನೇ ಪುರುಷಾಯ ಶಾಶ್ವತೇ
ಸಹಸ್ರಕೋಟಿ(ೞ)ಯುಗಧಾರಿಣೇ ನಮಃ

"ಮಲೆದೇಗುಲ" ಕನ್ನಡ ಸಾಹಿತ್ಯ ಸಂದರ್ಭದಲ್ಲಿ ಪುತಿನ ಸೃಷ್ಟಿಸಿದ ಅತ್ಯಪೂರ್ವವಾದ ಕೃತಿ. ಸಾಧು ಸಂತ ಸಿದ್ಧರಿಂದ ಸಂಸ್ಥಾಪಿತವಾದ ದೇಗುಲಗಳೆಂಬ ಮಹಾಭಾವಗಳು ಮತ್ತು ಅಲ್ಲಿ ನಿಯೋಜಿತವಾಗಿರುವ ದೇವಕಲ್ಪಗಳು, ಋಷಿಮುಖೋದ್ಗತವಾದ ಬ್ರಹ್ಮಬೃಂಹಿತಗಳು, ಸಂಗೀತ ನೃತ್ಯ ಕಥನ ಶ್ರವಣಾದಿ ನಿತ್ಯಾಚರಣೆಗಳು, ಸಮಾಜವನ್ನು ಭವದ ಬಂಧದಿಂದ ಬಿಡಿಸಿ ರಸೋತ್ಕರ್ಷಕ್ಕೆ ಎತ್ತುವ ಉಪಾಯಗಳೆಂದು ಪುತಿನ ಭಾವಿಸುತ್ತಾರೆ. ದೈವೀಭಾವವನ್ನು ಜಾಗೃತಗೊಳಿಸಿ ಜೀವಕ್ಕೆ ಅಹಂಕಾರನಿರಸನದ ವಿನಯವನ್ನು ಪ್ರಾಪ್ತಗೊಳಿಸುವುದೇ ದೇಗುಲಸ್ಥಾಪನೆಯ ಪರಮೋದ್ದೇಶವೆಂಬುದು ಪುತಿನ ಅವರ ದೃಢವಾದ ನಂಬಿಕೆ. ಭವಮಗ್ನರಿಗೂ ರಸದರಿವು ಸ್ವಲ್ಪವಾದರೂ ಆಗಲೆಂದು ದೇಗುಲಗಳನ್ನು ದೇವಮಾನವರು ಕಲ್ಪಿಸಿರುವರು ಎನ್ನುವ ಪುತಿನ ಮೇಲುಕೋಟೆಯಲ್ಲಿರುವ ಮಲೆದೇಗುಲವನ್ನು ತಮ್ಮ ಧ್ಯಾನಕೇಂದ್ರ ಮಾಡಿಕೊಂಡು, ದೇಗುಲಗಳ ವಿಸ್ಮರಣೆಗೊಳಗಾದ ಮತ್ತೊಂದು ಮುಖದ ತಾತ್ವಿಕ ಅನ್ವೇಷಣೆಯನ್ನು ಈ ಕೃತಿಯಲ್ಲಿ ಅನನ್ಯವಾಗಿ ನಡೆಸಿದ್ದಾರೆ.

– ಎಚ್.ಎಸ್. ವೆಂಕಟೇಶಮೂರ್ತಿ

